| | | |
|---|---|---|
| ಉ | ಸದರಿಯವರಿಗೆ ಗೌರವಧನ ಪರಿಷ್ಕರಣೆ ಮಾಡಿರುವುದು ಯಾವಾಗ? | ಆಶಾ ಕಾರ್ಯಕರ್ತೆಯರಿಗೆ ನೀಡಲಾಗುತ್ತಿರುವ ಮಾಸಿಕ ಗೌರವಧನವನ್ನು ದಿನಾಂಕ:1/11/2019 ರಿಂದ ಅನ್ವಯವಾಗುವಂತೆ ರೂ.3500/- ರಿಂದ ರೂ.4000/-ಗಳಿಗೆ ಏರಿಕೆ ಮಾಡಲಾಗಿದೆ. |

ಸಂಪ್ಕೆಃಆಕುಕ 19 ಎಸ್‌ಟಿಕ್ಯೂ2020

(ಬಿ. ಶ್ರೀರಾಮುಲು)
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ
ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು

Scanned with CamScanner

## ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ:1721ಕ್ಕೆ ಅನುಬಂಧ-1

### ಆಶಾ ಕಾರ್ಯಕರ್ತೆಯರ ಕರ್ತವ್ಯಗಳು

1. ಮನೆ ಭೇಟಿಗಳು: – 2 ವರ್ಷಕ್ಕಿಂತ ಕೆಳಗಿರುವ ಮಕ್ಕಳು, ಅಪೌಷ್ಟಿಕ ಮಕ್ಕಳು ಮತ್ತು ಅನಾರೋಗ್ಯ ಪರಿಸ್ಥಿತಿ ಇರುವ ಮನೆಗಳಿಗೆ ಆದ್ಯತಾ ಭೇಟಿ.
2. ಗ್ರಾಮ /ನಗರ ಆರೋಗ್ಯ ಮತ್ತು ಪೌಷ್ಟಿಕ ದಿನಾಚರಣೆಗೆ ಅರ್ಹ ಫಲಾನುಭವಿಗಳನ್ನು ಕರೆದೊಯ್ಯುವುದು.
3. ಗ್ರಾಮ ಆರೋಗ್ಯ ನೈರ್ಮಲ್ಯ ಮತ್ತು ಪೌಷ್ಟಿಕಾಂಶ ಸಮಿತಿಯ (ವಿಹೆಚ್‌ಎಸ್‌ಎನ್‌ಸಿ) ಸದಸ್ಯ ಕಾರ್ಯದರ್ಶಿಯಾಗಿ ಕಾರ್ಯ ನಿರ್ವಹಣೆ.
4. ಆರೋಗ್ಯ ಸಂಸ್ಥೆಗಳಿಗೆ ಫಲಾನುಭವಿಯನ್ನು ಕರೆದ್ಯೊಯುವುದು.
5. ಗ್ರಾಮ ಆರೋಗ್ಯ ದಾಖಲೆಗಳನ್ನು ನಿರ್ವಹಿಸುವುದು.

### ಸಮುದಾಯಕ್ಕೆ ಈ ಕೆಳಗಿನ ವಿಷಯಗಳ ಬಗ್ಗೆ ಅರಿವು ಮೂಡಿಸುವುದು:

1. ಪೌಷ್ಟಿಕಾಂಶ.
2. ಮೂಲಭೂತ ನೈರ್ಮಲ್ಯ ಮತ್ತು ಆರೋಗ್ಯಕರ ಪದ್ಧತಿಗಳು.
3. ಆರೋಗ್ಯಕರ ಜೀವನ.
4. ಪ್ರಸ್ತುತ ಲಭ್ಯವಿರುವ ಆರೋಗ್ಯ ಸೇವೆಗಳು ಮತ್ತು ಇವುಗಳ ಸದುಪಯೋಗ

### ಮಹಿಳೆಯರು ಮತ್ತು ಕುಟುಂಬದವರಿಗೆ ಆಪ್ತ ಸಮಾಲೋಚನೆ

1. ಹೆರಿಗೆಯ ಸಿದ್ದತೆ
2. ಸುರಕ್ಷಿತ ಹೆರಿಗೆಯ ಪ್ರಾಮುಖ್ಯತೆ
3. ಸ್ತನ್ಯ ಪಾನದ ಪ್ರಾಮುಖ್ಯತೆ
4. ಲಸಿಕೆ
5. ಗರ್ಭನಿರೋಧಕಗಳ ಮಹತ್ವ
6. ಲೈಂಗಿಕ ಸೋಂಕುಗಳನ್ನು ತಡೆಗಟ್ಟುವಿಕೆ

### ಆರೋಗ್ಯ ಸಂವರ್ಧನ ಚಟುವಟಿಕೆಗಳಲ್ಲಿ ಭಾಗಿಯಾಗುವುದು

ಕಾಲಕಾಲಕ್ಕೆ ಸರ್ಕಾರವು ವಹಿಸುವ ಸಾಮಾಜಿಕ ಆರೋಗ್ಯ ಸೂಚಕಗಳಿಗೆ ಸಂಬಂಧಿಸಿದ ಚಟುವಟಿಕೆಗಳನ್ನು ಕಡ್ಡಾಯವಾಗಿ ನಿರ್ವಹಿಸುವುದು.

ಅನುಬಂಧ - 2 6



# ರಾಷ್ಟ್ರೀಯ ಆರೋಗ್ಯ ಅಭಿಯಾನ

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯ,
ಆನಂದರಾವ್ ವೃತ್ತ, ಬೆಂಗಳೂರು.



ಸಂಖ್ಯೆ: ಆರ್‌ಒ(ಆರ್‌ಸಿಹೆಚ್)/71/2018-19 ದಿನಾಂಕ: 02/03/2019

## ಮಾರ್ಗಸೂಚಿಗಳು

| | |
|---|---|
| ವಿಷಯ: | ಹೊಸ ಆಶಾ ಕಾರ್ಯಕರ್ತೆಯರ ಆಯ್ಕೆಗೆ ಸಂಬಂಧಿಸಿದ ಮಾರ್ಗಸೂಚಿಗಳ ಮಾನದಂಡಗಳನ್ನು ಮಾರ್ಪಾಡಿಸುವ ಹಾಗೂ ಸ್ಪಷ್ಟೀಕರಣ ನೀಡುವ ಬಗ್ಗೆ.. |
| ಉಲ್ಲೇಖ: | 1. ಮಾನ್ಯ ಮುಖ್ಯ ಕಾರ್ಯದರ್ಶಿಗಳು, ಕರ್ನಾಟಕ ಸರ್ಕಾರ, ಇವರ ಅಧ್ಯಕ್ಷತೆಯಲ್ಲಿ ದಿನಾಂಕ:16.10.2018 ರಂದು ನಡೆದ ಸಭೆಯಲ್ಲಿನ ಸಭಾ ನಡಾವಳಿಯ ಅನುಸಾರ ಸಾಕ್ಷರ ಭಾರತ ಯೋಜನೆಯಡಿ ಕಾರ್ಯನಿರ್ವಹಿಸಿದ ಮಹಿಳಾ ಪ್ರೇರಕರನ್ನು ಆಶಾ ಕಾರ್ಯಕರ್ತೆಯರ ಹುದ್ದೆಗೆ ಪರಿಗಣಿಸುವ ಬಗ್ಗೆ.<br>2. ಆಶಾ ಕಾರ್ಯಕರ್ತೆಯರ ಆಯ್ಕೆಗೆ ಸಂಬಂಧಿಸಿದಂತೆ ಜನಸಂಖ್ಯೆಯ ಮಿತಿಗೆ ಸಂಬಂಧಿಸಿದಂತೆ ಸ್ಪಷ್ಟೀಕರಣ ಕೋರಿ ಆಶಾ ಕಾರ್ಯಕ್ರಮ ವಿಭಾಗಕ್ಕೆ ಬರುತ್ತಿರುವ ದೂರವಾಣಿ ಕರೆಗಳು. |

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ ಆಶಾ ಕಾರ್ಯಕರ್ತೆಯರ ನೇಮಕಾತಿಗೆ ಸಂಬಂಧಿಸಿದಂತೆ ಕಾಲಕಾಲಕ್ಕೆ ಮಾರ್ಗಸೂಚಿಗಳನ್ನು ಹೊರಡಿಸಲಾಗುತ್ತಿದೆ.

ಉಲ್ಲೇಖ(1) ರಲ್ಲಿ ಸಾಕ್ಷರ ಭಾರತ ಯೋಜನೆಯಡಿ ಕಾರ್ಯನಿರ್ವಹಿಸಿ ಕರ್ತವ್ಯದಿಂದ ಬಿಡುಗಡೆಗೊಂಡ ಮಹಿಳಾ ಪ್ರೇರಕರನ್ನು ಆಶಾ ಕಾರ್ಯಕರ್ತೆಯರ ಆಯ್ಕೆಯಲ್ಲಿ ಪರಿಗಣಿಸಲು ಸೂಚಿಸಿರುತ್ತಾರೆ.

ಉಲ್ಲೇಖ (2) ರಂತೆ ಆಶಾ ಕಾರ್ಯಕರ್ತೆಯರ ಆಯ್ಕೆಗೆ ಜನಸಂಖ್ಯೆಯ ಮಿತಿಯ ಬಗ್ಗೆ ಸ್ಪಷ್ಟೀಕರಣ ಕೋರುತ್ತಾ ವಾಸ್ತವಿಕ ಜನಸಂಖ್ಯೆಯನ್ನು ಪರಿಗಣಿಸಲು ಸಮುದಾಯದಿಂದ ಕ್ಷೇತ್ರ ಮಟ್ಟದಲ್ಲಿ ಅಧಿಕಾರಿಗಳು ಮತ್ತು ಸಿಬ್ಬಂದಿಗಳಿಗೆ ಒತ್ತಡಗಳು ಬರುತ್ತಿದ್ದು, ಈ ಬಗ್ಗೆ ಅಧಿಕಾರಿಗಳು,ಸಿಬ್ಬಂದಿಗಳು ಮತ್ತು ಸಾರ್ವಜನಿಕರು ದೂರವಾಣಿ ಮುಖೇನ ಸ್ಪಷ್ಟನೆ ಕೋರಿರುತ್ತಾರೆ.

ಈ ಹಿನ್ನೆಲೆಯಲ್ಲಿ ಆಶಾ ಕಾರ್ಯಕರ್ತೆಯರ ಆಯ್ಕೆ ಪ್ರಕ್ರಿಯೆಯಲ್ಲಿ ಕೆಳಕಂಡ ಮಾನದಂಡಗಳನ್ನು ಕಡ್ಡಾಯವಾಗಿ ಅನುಸರಿಸಲು ಈ ಮೂಲಕ ಸೂಚಿಸಲಾಗಿದೆ. ಇನ್ನುಳಿದ ಮಾನದಂಡಗಳಲ್ಲಿ ಯಾವುದೇ ರೀತಿಯ ಬದಲಾವಣೆಗಳಿರುವುದಿಲ್ಲ.

1. ಖಾಲಿಯಿರುವ ಪ್ರದೇಶಗಳಲ್ಲಿ ಹೊಸ ಆಶಾ ಕಾರ್ಯಕರ್ತೆಯರ ಆಯ್ಕೆಯ ಸಂಧರ್ಭದಲ್ಲಿ ಸಾಕ್ಷರ ಭಾರತ ಯೋಜನೆಯಡಿ ಕಾರ್ಯನಿರ್ವಹಿಸಿರುವ ಮಹಿಳಾ ಪ್ರೇರಕರು ಆ ಪ್ರದೇಶಗಳಲ್ಲಿ ಲಭ್ಯವಿದ್ದರೆ ಪರಿಗಣಿಸುವುದು ಹಾಗೂ ಆಯ್ಕೆ ಪ್ರಕ್ರಿಯೆಯನ್ನು ಮಾರ್ಗಸೂಚಿಗಳಂತೆ ನಿರ್ವಹಿಸುವುದು.
2. ಆಶಾ ಕಾರ್ಯಕರ್ತೆಯರ ಆಯ್ಕೆಗೆ ಜನಸಂಖ್ಯೆಯನ್ನು ಪರಿಗಣನೆಗೆ ತೆಗೆದುಕೊಳ್ಳುವಾಗ ವಾಸ್ತವಿಕ ಜನಸಂಖ್ಯೆ ಅಥವಾ ಮಧ್ಯಂತರ ವಾರ್ಷಿಕ ಅಂದಾಜು

ಜನಸಂಖ್ಯೆಯನ್ನು (Mid-year projected population) ಪರಿಗಣಿಸಬಾರದು. 2011 ರ ಜನಗಣತಿಯ ಜನಸಂಖ್ಯೆಯನ್ನು ಪರಿಗಣಿಸುವುದು.

3. ಗುಡ್ಡಗಾಡು ಮತ್ತು ಮಲೆನಾಡಿನ ಪ್ರದೇಶಗಳನ್ನು ಹೊರತುಪಡಿಸಿ ಗ್ರಾಮೀಣ ಪ್ರದೇಶದಲ್ಲಿ 2011 ರ ಜನಗಣತಿಯ ಪ್ರಕಾರ ಪ್ರತಿ 1000 ಜನಸಂಖ್ಯೆಗೆ ಒಂದು ಆಶಾ ಕಾರ್ಯಕರ್ತೆಯನ್ನು ಆಯ್ಕೆ ಮಾಡುವುದು. ಒಂದು ಗ್ರಾಮದಲ್ಲಿ 1001 ರಿಂದ 1999 ಜನಸಂಖ್ಯೆ ಇದ್ದರೆ ಎರಡನೇ ಆಶಾ ಕಾರ್ಯಕರ್ತೆಯನ್ನು ಆಯ್ಕೆ ಮಾಡಲು ಅವಕಾಶವಿರುವುದಿಲ್ಲ. ಎರಡನೇ ಆಶಾ ಕಾರ್ಯಕರ್ತೆಯನ್ನು ಆಯ್ಕೆ ಮಾಡಲು ಕನಿಷ್ಠ 2000 ಜನಸಂಖ್ಯೆ ಇರಬೇಕು.

**ಅಭಿಯಾನ ನಿರ್ದೇಶಕರು(ಎನ್.ಹೆಚ್.ಎಂ)**

ಪ್ರತಿ: ಮಾಹಿತಿಗಾಗಿ ಗೌರವಪೂರ್ವಕವಾಗಿ ಸಲ್ಲಿಸಿದೆ.

1. ಸನ್ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರು, ಕರ್ನಾಟಕ ಸರ್ಕಾರ, ವಿಕಾಸ ಸೌಧ, ಬೆಂಗಳೂರು.
2. ಸನ್ಮಾನ್ಯ ಮುಖ್ಯ ಕಾರ್ಯದರ್ಶಿಗಳು, ಕರ್ನಾಟಕ ಸರ್ಕಾರ, ವಿಧಾನಸೌಧ, ಬೆಂಗಳೂರು.
3. ಮಾನ್ಯ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ಕರ್ನಾಟಕ ಸರ್ಕಾರ.
4. ಮಾನ್ಯ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ಆಯುಷ್ ಸೇವೆಗಳು, ಕರ್ನಾಟಕ ಸರ್ಕಾರ.
5. ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯ, ಬೆಂಗಳೂರು
6. ಯೋಜನಾ ನಿರ್ದೇಶಕರು (ಆರ್.ಸಿ.ಹೆಚ್), ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯ, ಬೆಂಗಳೂರು

ಪ್ರತಿ: ಮುಂದಿನ ಕ್ರಮಕ್ಕಾಗಿ

1. ಎಲ್ಲಾ ಜಿಲ್ಲೆಗಳ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳು.
2. ಎಲ್ಲಾ ಜಿಲ್ಲೆಗಳ ಜಿಲ್ಲಾ ಆರ್‌ಸಿಹೆಚ್ ಅಧಿಕಾರಿಗಳು.
3. ಎಲ್ಲಾ ತಾಲ್ಲೂಕುಗಳ ತಾ॥ ಆರೋಗ್ಯಾಧಿಕಾರಿಗಳು
4. ಕಚೇರಿ ಪ್ರತಿ.

ಕರ್ನಾಟಕ ಸರ್ಕಾರ

ಸಂಖ್ಯೆ.ಆರ್‌ಒ/ಆಶಾ/49/2006-07.

ಆರೋಗ್ಯ ಮತ್ತು ಕು.ಕ.ಸೇವೆಗಳ ನಿರ್ದೇಶನಾಲಯ,
ಬೆಂಗಳೂರು ದಿನಾಂಕ 15-03-2008

ಇವರಿಗೆ,

ಜಿಲ್ಲಾ ಆರೋಗ್ಯ ಮತ್ತು ಕುಟುಂಬ
ಕಲ್ಯಾಣ ಅಧಿಕಾರಿಗಳು. ಚಿತ್ರದುರ್ಗ ಜಿಲ್ಲೆ.

ವಿಷಯ: ರಾಷ್ಟ್ರೀಯ ಗ್ರಾಮೀಣ ಆರೋಗ್ಯ ಅಭಿಯಾನ ಅಡಿಯಲ್ಲಿ ಆಶಾ ಕಾರ್ಯಕರ್ತೆಯರನ್ನು ಗುರುತಿಸುವ ಬಗ್ಗೆ

ಅಭಿಯಾನ ನಿರ್ದೇಶಕರು, ರಾಷ್ಟ್ರೀಯ ಗ್ರಾಮೀಣ ಆರೋಗ್ಯ ಅಭಿಯಾನ ಇವರ ಪತ್ರ ಸಮ ಸಂಖ್ಯೆ ದಿನಾಂಕ 15-03-2008ರಲ್ಲಿ ಆಶಾ ಕಾರ್ಯಕರ್ತೆಯರನ್ನು ಗುರುತಿಸುವ ಸಲುವಾಗಿ ಮಾರ್ಗ ಸೂಚಿಗಳನ್ನು ಈ ಪತ್ರದೊಂದಿಗೆ ಲಗತ್ತಿಸಲಾಗಿದೆ. ಈ ಮಾರ್ಗಸೂಚಿಗಳ ಪ್ರಕಾರ ಪ್ರತಿ ಗ್ರಾಮ ಸಭೆ ಅಥವಾ ಪ್ರತಿ 1000 ಜನಸಂಖ್ಯೆಗೆ ಒಬ್ಬರು ಆಶಾ ಕಾರ್ಯಕರ್ತೆಯರನ್ನು ಗುರುತಿಸುವುದು.

ಈ ಬಗ್ಗೆ ಸೂಕ್ತ ಕ್ರಮ ಕೈಗೊಂಡು ಆಶಾ ಕಾರ್ಯಕರ್ತೆಯರನ್ನು ಗುರುತಿಸುರವ ಆಯ್ಕೆ ಪಟ್ಟಿಯನ್ನು ನಿರ್ದೇಶನಾಲಯಕ್ಕೆ ಸಲ್ಲಿಸುವುದು.

ಯೋಜನಾ ನಿರ್ದೇಶಕರು (ಆರ್‌ಸಿಹೆಚ್)

ಪ್ರತಿಯನ್ನು ಮಾಹಿತಿಗಾಗಿ ಹಾಗೂ ಮುಂದಿನ ಕ್ರಮಕ್ಕಾಗಿ ರವಾನಿಸಿದೆ:

1. ಜಿಲ್ಲಾ ಆರ್‌ಸಿಹೆಚ್ ಅಧಿಕಾರಿಗಳು, ಜಿಲ್ಲಾ ಆರೋಗ್ಯ ಮತ್ತು ಕು.ಕ.ಕಛೇರಿ. . . . . . . . ಜಿಲ್ಲೆ
2. ಪ್ರಾಂಶುಪಾಲರು, ಜಿಲ್ಲಾ ತರಬೇತಿ ಕೇಂದ್ರ, . . . . . . . . . . . . . . . . . . . ಜಿಲ್ಲೆ
3. ಉಪ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ. . . . . . . . . . ಜಿಲ್ಲೆ
4. ಕಛೇರಿ ಪ್ರತಿ

8
3/4/2008

## ಕರ್ನಾಟಕ ಸರ್ಕಾರ

ಸಂಖ್ಯೆ: ಆರ್‌ಓ/ಆಶಾ/49/2006-07

ಆರೋಗ್ಯ ಮತ್ತು ಕು.ಕ. ಸೇವೆಗಳ ನಿರ್ದೇಶನಾಲಯ
ಬೆಂಗಳೂರು. ದಿನಾಂಕ. 15/3/2008

### ಅಧಿಕೃತ ಜ್ಞಾಪನಾ ಪತ್ರ

ವಿಷಯ: ರಾಷ್ಟ್ರೀಯ ಗ್ರಾಮೀಣ ಆರೋಗ್ಯ ಅಭಿಯಾನ ಅಡಿಯಲ್ಲಿ ಆಶಾ ಗುರುತಿಸುವ ಬಗ್ಗೆ.

ರಾಷ್ಟ್ರೀಯ ಗ್ರಾಮೀಣ ಆರೋಗ್ಯ ಅಭಿಯಾನ ಕಾರ್ಯಕ್ರಮದಡಿಯಲ್ಲಿ ನಿಮ್ಮ ಜಿಲ್ಲೆಯಲ್ಲಿ ಆಶಾ ಕಾರ್ಯಕರ್ತೆಯರನ್ನು ಗುರುತಿಸುವ ಬಗ್ಗೆ ಈ ಕೆಳಗೆ ತಿಳಿಸಿರುವಂತೆ ಕಾರ್ಯನಿರ್ವಹಿಸಲು ಸೂಚಿಸಲಾಗಿದೆ.

'ಎ' ಅರ್ಹತೆ:

1. ಈ ಆಶಾ ಕಾರ್ಯಕರ್ತೆಯರು 7ನೇ ತರಗತಿ ತೇರ್ಗಡೆ ಹೊಂದಿದ್ದು ಓದು ಬರಹ ತಿಳಿದವರಾಗಿರಬೇಕು ಹಾಗೂ ಉತ್ತಮ ಮುಂದಾಳತ್ವ ಗುಣ ಮತ್ತು ಮಾಹಿತಿಯನ್ನು ಪ್ರಚಾರಿಸುವ ನೈಪುಣ್ಯತೆ ಹೊಂದಿರಬೇಕು.
2. ಆಶಾ ಅಭ್ಯರ್ಥಿಯು ಎರಡು ಮಕ್ಕಳ ತಾಯಿಯಾಗಿದ್ದು 2ನೇ ಮಗುವಿಗೆ ಕನಿಷ್ಠ 5ವರ್ಷ ಮೇಲ್ಪಟ್ಟಿರಬೇಕು.
3. ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ಮತ್ತು ಬಡತನ ರೇಖೆಗಿಂತ ಕೆಳಗಿರುವ ಮಹಿಳೆಯರಿಗೆ ಆದ್ಯತೆ ನೀಡಬೇಕು.

'ಬಿ' ಆಶಾ ಕಾರ್ಯಕರ್ತೆರಯ ಸಂಖ್ಯೆ:

1. ಪ್ರತಿ ಗ್ರಾಮ /1000 ಜನಸಂಖ್ಯೆಗೆ ಒಬ್ಬರು ಆಶಾ ಕಾರ್ಯಕರ್ತೆಯರು.

'ಸಿ' ನಡವಳಿಗಳು

1. ಕಿರಿಯ ಮಹಿಳಾ ಆರೋಗ್ಯ ಸಹಾಯಕಿ ಮತ್ತು ಗ್ರಾಮ ನೈರ್ಮಲ್ಯ ಸಮಿತಿಯವರು 3 ಅರ್ಹ ಆಶಾ ಅಭ್ಯರ್ಥಿಗಳನ್ನು ಪ್ರತಿ 1000 ಜನಸಂಖ್ಯೆಗೆ ಅನುಗುಣವಾಗಿ ಗುರುತಿಸುವುದು, ಹೀಗೆ ಗುರುತಿಸಿದ ಆಶಾ ಕಾರ್ಯಕರ್ತೆಯರನ್ನು ಗ್ರಾಮ ನೈರ್ಮಲ್ಯ ಸಮಿತಿ ನಡವಳಿ ಪುಸ್ತಕದಲ್ಲಿ ದಾಖಲಿಸುವುದು.

2. ಆಶಾ ಕಾರ್ಯಕರ್ತೆಯರನ್ನು ಗುರುತಿಸುವ ಸಮಯದಲ್ಲಿ ಗ್ರಾಮ ಪಂಚಾಯ್ತಿ ಕಾರ್ಯದರ್ಶಿಗಳು ಅಥವಾ ಗ್ರಾಮ ಲೆಕ್ಕಿಗರ ಅಥವಾ ಅಂಗನವಾಡಿ ಕಾರ್ಯಕರ್ತರ ಸಹಾಯವನ್ನು ಪಡೆಯಬಹುದಾಗಿದೆ. ಇವರ ಸಹಾಯವನ್ನು ಪಡೆಯಲು ಕಿರಿಯ ಆರೋಗ್ಯ ಸಹಾಯಕಿ ಹಾಗೂ ಗ್ರಾಮ ನೈರ್ಮಲ್ಯ ಸಮಿತಿಯವರು ನಿರ್ಧರಿಸಬಹುದು.

3. ಈ ಮೂರು ಗುರುತಿಸಿರುವ ಆಶಾ ಅಭ್ಯರ್ಥಿಗಳಲ್ಲಿ ಪ್ರತಿ 1000 ಜನಸಂಖ್ಯೆಗೆ ಒಬ್ಬ ಆಶಾ ಕಾರ್ಯಕರ್ತೆಯರಂತೆ ಆಯ್ಕೆ ಮಾಡಲು ಪಟ್ಟಿಯನ್ನು ಗ್ರಾಮ ಸಭೆಗೆ ಸಲ್ಲಿಸುವುದು.

4. ವಿಶೇಷ ಗ್ರಾಮಸಭೆಯಲ್ಲಿ ಅಂತಿಮವಾಗಿ ಪ್ರತಿ 1000 ಜನಸಂಖ್ಯೆಗಳಿಗೆ ಈ ಮೂರು ಅಭ್ಯರ್ಥಿಗಳಲ್ಲಿ ಒಬ್ಬರು ಆಶಾ ಕಾರ್ಯಕರ್ತೆಯರನ್ನು ಗುರುತಿಸಿ ಅದನ್ನು ಗ್ರಾಮ ಸಭೆ ನಡವಳಿ ಪುಸ್ತಕದಲ್ಲಿ ನಮೂದಿಸುವುದು.

5. ಗ್ರಾಮ ನೈರ್ಮಲ್ಯ ಸಮಿತಿಯವರು ಅಂತಿಮವಾಗಿ ಗ್ರಾಮ ಸಭೆಯಲ್ಲಿ ಗುರುತಿಸಿರುವ ಆಶಾ ಕಾರ್ಯಕರ್ತೆಗೆ ಅನುಬಂಧ-1ರಲ್ಲಿ ತಿಳಿಸಿರುವ ನಮೂನೆಯಂತೆ ಪತ್ರ ನೀಡುವುದು.

6. ಹೀಗೆ ಗುರುತಿಸಲ್ಪಟ್ಟ ಆಶಾ ಕಾರ್ಯಕರ್ತೆಯರ ಹೆಸರನ್ನು ಗ್ರಾಮ ವ್ಯಾಪ್ತಿಯಲ್ಲಿರುವ ಉಪ ಕೇಂದ್ರ/ ಪ್ರಾಥಮಿಕ ಆರೋಗ್ಯ ಕೇಂದ್ರ/ತಾಲ್ಲೂಕು ಆರೋಗ್ಯಾಧಿಕಾರಿಗಳು/ಜಿಲ್ಲಾ ಆರ್.ಸಿ.ಹೆಚ್ ಅಧಿಕಾರಿಗಳಿಗೆ ತಿಳಿಸುವುದು

7. ಮೇಲೆ ಸೂಚಿಸಿರುವ 1 ರಿಂದ 6 ರವರೆಗೆ ಮಾರ್ಗಸೂಚಿಗಳ ಮೇಲ್ವಿಚಾರಣೆಯನ್ನು ಪ್ರಾಥಮಿಕ ಆರೋಗ್ಯ ಕೇಂದ್ರ ವೈದ್ಯಾಧಿಕಾರಿಗಳು ನಡೆಸುವುದು.

'ಡಿ' ಇತರ:

1. ಎಲ್ಲಾ ಆಶಾ ಕಾರ್ಯಕರ್ತೆಯರನ್ನು ಗ್ರಾಮ ಆರೋಗ್ಯ ನೈರ್ಮಲ್ಯ ಸಮಿತಿಯಲ್ಲಿ ಸದಸ್ಯರಾಗಿ ಅಥವಾ ಆಹ್ವಾನಿತರಾಗಿ ಭಾಗಬಹಿಸುವಂತೆ ಸೂಚಿಸಿರುವುದು.

ಅಭಿಯಾನ ನಿರ್ದೇಶಕರು
ರಾಷ್ಟ್ರೀಯ ಗ್ರಾಮೀಣ ಆರೋಗ್ಯ ಅಭಿಯಾನ

ಪ್ರತಿಯನ್ನು ಮಾಹಿತಿಗಾಗಿ:

1. ಸರ್ಕಾರದ ಕಾರ್ಯದರ್ಶಿಗಳು, ಆರೋಗ್ಯ ಮತ್ತು ಕು.ಕ. ಇಲಾಖೆ, ವಿಕಾಸ ಸೌಧ, ಬೆಂಗಳೂರು
2. ಸರ್ಕಾರದ ಕಾರ್ಯದರ್ಶಿಗಳು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೆಂಗಳೂರು
3. ಆಯುಕ್ತರು, ಆರೋಗ್ಯ ಮತ್ತು ಕು.ಕ. ಸೇವೆಗಳು, ಬೆಂಗಳೂರು
4. ನಿರ್ದೇಶಕರು ಆರೋಗ್ಯ ಮತ್ತು ಕು.ಕ. ಸೇವೆಗಳು, ಬೆಂಗಳೂರು

ಪ್ರತಿಯನ್ನು ಮಾಹಿತಿಗಾಗಿ ಹಾಗೂ ಮುಂದಿನ ಕ್ರಮಕ್ಕಾಗಿ:

1. ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳು, ______________ ಜಿಲ್ಲೆ
2. ಜಿಲ್ಲಾ ಆರ್.ಸಿ.ಹೆಚ್. ಅಧಿಕಾರಿಗಳು, ______________ ಜಿಲ್ಲೆ
3. ಉಪ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ______________ ಜಿಲ್ಲೆ
4. ಎಲ್ಲಾ ತಾಲ್ಲೂಕು ಆರೋಗ್ಯಾಧಿಕಾರಿಗಳು, ______________ ಜಿಲ್ಲೆ
5. ಕಛೇರಿ ಪ್ರತಿ

## ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ:1721ಕ್ಕೆ ಅನುಬಂಧ-3

| 34 ವಿವಿಧ ಆರೋಗ್ಯ ಚಟುವಟಿಕೆಗಳಿಗೆ ಕಾರ್ಯನಿರ್ವಹಣೆ ಆಧಾರಿತ ಪ್ರೋತ್ಸಾಹ ಧನದ ಭತ್ಯೆಗಳ ವಿವರ | | |
|---|---|---|
| ಕ್ರಸಂ | ಚಟುವಟಿಕೆ | ಪ್ರೋತ್ಸಾಹಧನದ ಮೊತ್ತ (ರೂಪಾಯಿಗಳಲ್ಲಿ) |
| 1. | ಗರ್ಭಿಣಿ ಆರೈಕೆಗೆ | 300 |
| 2. | ಸಾಂಸ್ಥಿಕ ಹೆರಿಗೆ ಉತ್ತೇಜನಕ್ಕಾಗಿ | 300 |
| 3. | ತಾಯಿ ಮರಣದ ವರದಿ | 500 |
| 4. | ಗೃಹಾಧಾರಿತ ನವಜಾತ ಶಿಶು ಆರೈಕೆ | 250 |
| 5. | ಕಡಿಮೆ ಹುಟ್ಟು ತೂಕದ ಮಕ್ಕಳ ಅನುಸರಣೆ | 50 |
| 6. | ಎಸ್.ಎನ್.ಸಿ.ಯು. ನಿಂದ ಬಿಡುಗಡೆಯಾದ ಮಕ್ಕಳ ಅನುಸರಣೆ | 50 |
| 7. | 'ಮಾ' ಕಾರ್ಯಕ್ರಮದಡಿ ಬೆಂಬಲ ಗುಂಪುಗಳ ಸಭೆಯನ್ನು ನಡೆಸಲು | 100 |
| 8. | ಅಪೌಷ್ಟಿಕತೆಯಿಂದ ಬಳಲುತ್ತಿರುವ ಮಕ್ಕಳನ್ನು ಗುರುತಿಸುವುದು ಮತ್ತು ಆರೋಗ್ಯ ಸಂಸ್ಥೆಗಳಿಗೆ ಶಿಫಾರಸು ಮಾಡುವುದು. | 150 |
| 9. | ಮೊದಲ ವರ್ಷದ ಚುಚ್ಚುಮದ್ದು ಸೇವೆಗಳಿಗೆ | 100 |
| 10. | ಎರಡನೇ ವರ್ಷದ ಚುಚ್ಚುಮದ್ದು ಸೇವೆಗಳು | 50 |
| 11. | ಚುಚ್ಚುಮದ್ದು ಸೇವೆಗಳಿಗೆ ಅರ್ಹ ಮಕ್ಕಳ ಪಟ್ಟಿಯನ್ನು ತಯಾರಿಸಿದರೆ | 100 |
| 12. | ಪಿ.ಪಿ.ಐ.ಯು.ಸಿ.ಡಿ ಯನ್ನು ಅಳವಡಿಸಿಕೊಳ್ಳಲು ಉತ್ತೇಜಿಸಿದರೆ | 150 |
| 13. | ಪುರುಷರನ್ನು ಸಂತಾನಹರಣಚಿಕಿತ್ಸೆಗೆ ಉತ್ತೇಜಿಸಿದರೆ | 200 |
| 14. | ಸ್ತ್ರೀಯರನ್ನು ಸಂತಾನಹರಣಚಿಕಿತ್ಸೆಗೆ ಉತ್ತೇಜಿಸಿದರೆ | 150 |
| 15. | ವೈದ್ಯಕೀಯ ಗರ್ಭಪಾತಕ್ಕೆ ಉತ್ತೇಜಿಸಿದರೆ | 100 |
| 16. | ಎರಡು ಜನನದ ನಡುವಿನ ಅಂತರವನ್ನು ಖಾತ್ರಿಪಡಿಸಿದರೆ | 500 |
| 17. | ಗ್ರಾಮ ಆರೋಗ್ಯ ಮತ್ತು ಪೌಷ್ಟಿಕ ಆಹಾರ ದಿನಾಚರಣೆಯಲ್ಲಿ ಭಾಗಿಯಾದರೆ | 200 |
| 18. | ಪ್ರಾಥಮಿಕ ಆರೋಗ್ಯ ಕೇಂದ್ರದ ಮಾಸಿಕ ಸಭೆಗೆ ಹಾಜರಾದರೆ | 150 |
| 19. | ಗ್ರಾಮ ಆರೋಗ್ಯ ಮತ್ತು ನೈರ್ಮಲ್ಯ ಹಾಗೂ ಪೌಷ್ಟಿಕಾಂಶ ಸಮಿತಿ ಸಭೆಯನ್ನು ನಡೆಸಿದರೆ | 150 |
| 20. | ಗರ್ಭಿಣಿಯರ ಪಟ್ಟಿಯ ನಿರ್ವಹಣೆ | 100 |
| 21. | ಅರ್ಹ ದಂಪತಿಗಳ ಪಟ್ಟಿಯನ್ನು ತಯಾರಿಸುವುದು | 100 |
| 22. | ಮನೆ ಮನೆ ಸಮೀಕ್ಷೆ | 100 |
| 23. | ಗ್ರಾಮ ಆರೋಗ್ಯ ಪುಸ್ತಕದ ನಿರ್ವಹಣೆಗೆ | 100 |
| 24. | ಪಿ.ಎ.ಐ.ಯು.ಸಿ.ಡಿ ಅಳವಡಿಕೆಗೆ ಪ್ರೋತ್ಸಾಹಿಸುವುದು | 100 |
| 25. | ನೇರ ವೀಕ್ಷಣೆ ಚಿಕಿತ್ಸೆ (ಡಾಟ್ಸ್) ಸೇವಾ ಪೂರೈಕೆದಾರರಾಗಿ ಬಹುವಿಧ ಔಷಧಿ ಕ್ಷಯರೋಗ ಚಿಕಿತ್ಸೆ ನೀಡಿದರೆ. | 5000 |
| 26. | ನೇರ ವೀಕ್ಷಣೆ ಚಿಕಿತ್ಸೆ (ಡಾಟ್ಸ್) ಸೇವಾ ಪೂರೈಕೆದಾರರಾಗಿ ಕ್ಯಾಟ್-2 (ಎರಡನೇ ಹಂತ) ಕ್ಷಯರೋಗ ಚಿಕಿತ್ಸೆ ನೀಡಿದರೆ | 1500 |
| 27. | ಡಾಟ್ಸ್ ಸೇವಾ ಪೂರೈಕೆದಾರರಾಗಿ ಕ್ಯಾಟ್-1 (ಮೊದಲ ಹಂತ) ಔಷಧಿ ಕ್ಷಯರೋಗ ಚಿಕಿತ್ಸೆ ನೀಡಿದರೆ | 1000 |
| 28. | ಕುಷ್ಠ ರೋಗಿಗಳಿಗೆ (ಎಂ.ಬಿ.ಪ್ರಕರಣಗಳು) ಚಿಕಿತ್ಸೆ ನೀಡಿದರೆ | 600 |
| 29. | ಕುಷ್ಠ ರೋಗಿಗಳಿಗೆ (ಪಿ.ಬಿ.ಪ್ರಕರಣಗಳು) ಚಿಕಿತ್ಸೆ ನೀಡಿದರೆ | 400 |
| 30. | ಕುಷ್ಠ ರೋಗಿಗಳನ್ನು ಗುರುತಿಸುವಿಕೆ | 250 |
| 31. | ಮಲೇರಿಯಾ ರೋಗಕ್ಕೆ ಚಿಕಿತ್ಸೆ | 50 |
| 32. | ಸಂಶಯಾಸ್ಪದ ಮಲೇರಿಯಾ ಪ್ರಕರಣಗಳ ಸ್ಲೈಡ್ ತಯಾರಿಸುವುದು | 150 |
| 33. | ಉಪ್ಪಿನ ಪರೀಕ್ಷೆ | 25 |